

# ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 22-03-2021 ಪ್ರಶ್ನೆ ಸಂಖ್ಯೆ : 1540 (1878)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 22-03-2021

ಉತ್ತರಿಸುವ ಸಚಿವರು : ಅರಣ್ಯ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

ವಿಷಯ : ಮಾಹಿತಿ, ಜೈವಿಕ ಮತ್ತು ವಿಜ್ಞಾನ, ತಂತ್ರಜ್ಞಾನ ಇಲಾಖೆಯ ಕಂಪನಿಗಳ ಬಗ್ಗೆ

(ಅ) ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಮತ್ತು ವಿಜ್ಞಾನ, ತಂತ್ರಜ್ಞಾನ ಎಂದರೇನು ; ಇದರ ವ್ಯಾಖ್ಯದಡಿಯಲ್ಲಿ ಬರುವ ಕಂಪನಿಗಳು/ಉದ್ಯಮಗಳು ಯಾವುವು; ರಾಜ್ಯದಲ್ಲಿ ಇಲ್ಲಿಯವರೆವಿಗೂ ಎಷ್ಟು ಕಂಪನಿ/ಉದ್ಯಮಗಳನ್ನು ಸ್ಥಾಪನೆ ಮಾಡಲಾಗಿದೆ; (ಪ್ರತ್ಯೇಕವಾಗಿ, ಕಂಪನಿ ಹೆಸರು, ವಿಳಾಸದೊಂದಿಗೆ ವಿವರವಾದ ಮಾಹಿತಿ ಒದಗಿಸುವುದು)

(ಆ) ವಿಜ್ಞಾನ, ತಂತ್ರಜ್ಞಾನ ಎಂದರೇನು; ಇದರ ವ್ಯಾಖ್ಯೆಯಡಿ ಬರುವ ಕಂಪನಿಗಳು ಉದ್ಯಮಗಳಾವುವು; ರಾಜ್ಯದಲ್ಲಿ ಇಲ್ಲಿಯವರೆಗೂ ಎಷ್ಟು ಕಂಪನಿ/ ಉದ್ಯಮಗಳನ್ನು ಸ್ಥಾಪನೆ ಮಾಡಲಾಗಿದೆ; ವಿವರವಾಗಿ ಕಂಪನಿ ಹೆಸರು, ವಿಳಾಸದೊಂದಿಗೆ ಮಾಹಿತಿ ಕೊಡುವುದು ;

(ಇ) ಈ ಕಂಪನಿಗಳು ಸರೋಜಿನ ಮಹಿಷಿ ವರದಿ ಪ್ರಕಾರ ಕನ್ನಡಿಗರಿಗೆ ಉದ್ಯೋಗ ನೀಡಲಾಗುತ್ತಿದೆಯೇ; ನೀಡದಿದ್ದಲ್ಲಿ, ಸರ್ಕಾರ ತೆಗೆದುಕೊಂಡ ಕ್ರಮಗಳೇನು;

(ಈ) ಈ ಖಾಸಗಿ ಕಂಪನಿಗಳ ಮೇಲೆ ಸರ್ಕಾರದ ಹೊಣೆಗಾರಿಕೆ ಏನಿದೆ ; ಸದರಿ ಕಂಪನಿಗಳು ಸರ್ಕಾರದಿಂದ ಪಡೆದಿರುವ ಪ್ರಯೋಜನಗಳೇನು ? (ವಿವರವಾದ ಮಾಹಿತಿ ಕೊಡುವುದು)